# ಕರ್ನಾಟಕ ವಿಧಾನ ಪರಿಷತ್ತು
## 146 ನೇ ಅಧಿವೇಶನ 2022

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2457
ಮಾನ್ಯ ಸದಸ್ಯರ ಹೆಸರು : ಡಾ॥ ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 23-03-2022
ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಲೋಕೋಪಯೋಗಿ ಇಲಾಖೆಯ ರಸ್ತೆಗಳ ಟೋಲ್ ಸಂಗ್ರಹವನ್ನು ಖಾಸಗಿ ಸಂಸ್ಥೆಗಳನ್ನು ನೀಡಿದ್ದು, ಇದರಿಂದ ಟೋಲ್ ಗೇಟ್ ಇರುವ ಪ್ರದೇಶದ ನಿವಾಸಿಗಳಿಗೆ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಖಾಸಗಿ ಸಂಸ್ಥೆಯ ಮುಖಾಂತರ ಟೋಲ್ ಗುತ್ತಿಗೆಗಳನ್ನು ಮೂರು ವರ್ಷಗಳ ಅವಧಿಗೆ ವಹಿಸಲಾಗುತ್ತಿದ್ದು, ಗುತ್ತಿಗೆದಾರರು ನಿಗಮದ ಯೋಜನಾ ಕಛೇರಿಯ ಇಂಜಿನಿಯರ್‌ಗಳೊಂದಿಗೆ ಜಂಟಿಯಾಗಿ ಪರಿವೀಕ್ಷಿಸಿ ಸೂಕ್ತ ಸ್ಥಳದಲ್ಲಿ ಟೋಲ್ ಪ್ಲಾಜಾವನ್ನು ನಿರ್ಮಿಸಬೇಕಾಗಿರುತ್ತದೆ. ಟೋಲ್ ಅಧಿಸೂಚನೆಯ ಪ್ರಕಾರ ಟೋಲ್ ಪ್ಲಾಜಾದ ಸ್ಥಳವನ್ನು ನಗರ/ಪಟ್ಟಣ/ಮುನಿಸಿಪಲ್ ಪರಿಮಿತಿಯಿಂದ 10 ಕಿ.ಮೀ ಗಿಂತ ಹೆಚ್ಚಿನ ದೂರದಲ್ಲಿ ನಿರ್ಮಿಸ ಬೇಕಾಗಿರುತ್ತದೆ. ಆದಾಗ್ಯೂ ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ನಗರ/ಪಟ್ಟಣ/ಮುನಿಸಿಪಲ್ ಪರಿಮಿತಿಯಿಂದ 10 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ಅಂದರೆ 5 ಕಿ.ಮೀ ಗಿಂತ ಹೆಚ್ಚಿನ ಅಂತರದಲ್ಲಿ ಟೋಲ್ ಪ್ಲಾಜಾಗಳನ್ನು ನಿರ್ಮಿಸಲು ಅವಕಾಶವಿರುತ್ತದೆ. ಆದರಂತೆ ಟೋಲ್ ಪ್ಲಾಜಾಗಳನ್ನು ಸ್ಥಳೀಯ ಪ್ರದೇಶದ ನಿವಾಸಿಗಳಿಗೆ ಅನಾನುಕೂಲವಾಗದಂತೆ ನಿರ್ಮಿಸಲಾಗುತ್ತಿದೆ.<br><br>ಸ್ಥಳೀಯ ನಿವಾಸಿಗಳಿಗೆ ಅನುಕೂಲವಾಗಲು, ಟೋಲ್‌ಗೇಟ್‌ನಿಂದ 20 ಕಿ.ಮೀ. ಅಂತರದಲ್ಲಿ ವಾಸಿಸುವ ನಿವಾಸಿಗಳಿಗೆ ಸರ್ಕಾರದ ದಿನಾಂಕ: 07.03.2015ರ ಟೋಲ್ ಅಧಿಸೂಚನೆಯಲ್ಲಿ ಲೋಕಲ್ ಪಾಸ್ ಸೌಲಭ್ಯವಿದ್ದು ಮಾಹೆಗೆ ರೂ.205/- ಪಾವತಿಸಿ ಲೋಕಲ್ ಪಾಸ್ ಪಡೆಯಬಹುದಾಗಿರುತ್ತದೆ. ಸದರಿ ಅಧಿಸೂಚನೆಯಲ್ಲಿ ದ್ವಿಚಕ್ರ, ತ್ರಿಚಕ್ರ ಕೃಷಿ ಚಟುವಟಿಕೆಗಳಲ್ಲಿ ಒಳಪಟ್ಟಿರುವ ವಾಹನಗಳಿಗೆ ಟೋಲ್ ಶುಲ್ಕ ಪಾವತಿಯಿಂದ ಸಂಪೂರ್ಣ ವಿನಾಯಿತಿಇರುತ್ತದೆ. |
| ಆ) | ಟೋಲ್ ಸಂಗ್ರಹ ಪ್ರದೇಶದಿಂದ ಎಷ್ಟು ಕಿ.ಮೀ ವ್ಯಾಪ್ತಿಯ ನಿವಾಸಿಗಳಿಗೆ ಸದರಿ ಟೋಲ್‌ಗೇಟ್ ಮುಖಾಂತರ ಹೋಗುವಾಗ ಟೋಲ್ ಕಟ್ಟುವುದರಿಂದ ವಿನಾಯಿತಿ ನೀಡಲಾಗಿದೆ. | ಟೋಲ್ ಗೇಟ್‌ನಿಂದ 20. ಕಿ.ಮೀ. ಅಂತರದಲ್ಲಿ ವಾಸಿಸುವ ನಿವಾಸಿಗಳಿಗೆ ಸರ್ಕಾರದ ದಿನಾಂಕ: 07.03.2015ರ ಟೋಲ್ ಅಧಿಸೂಚನೆಯಲ್ಲಿ ಲೋಕಲ್ ಪಾಸ್ ಸೌಲಭ್ಯವಿದ್ದು ಮಾಹೆಗೆ ರೂ.205/- ಪಾವತಿಸಿ ಲೋಕಲ್ ಪಾಸ್ ಪಡೆಯ ಬಹುದಾಗಿರುತ್ತದೆ. ಸದರಿ ಅಧಿಸೂಚನೆಯಲ್ಲಿ ದ್ವಿಚಕ್ರ, ತ್ರಿಚಕ್ರ ಕೃಷಿ ಚಟುವಟಿಕೆಗಳಲ್ಲಿ ಒಳಪಟ್ಟಿರುವ ವಾಹನಗಳಿಗೆ ಟೋಲ್ ಶುಲ್ಕ ಪಾವತಿಯಿಂದ ಸಂಪೂರ್ಣ ವಿನಾಯಿತಿ ಇರುತ್ತದೆ. |
| ಇ) | ಟೋಲ್ ಪ್ಲಾಜಾ ನಿರ್ವಹಿಸುವವರು ಯಾವ ಯಾವ ಸಕ್ಷಮ ಪ್ರಾಧಿಕಾರದಡಿ ಅನುಮತಿ ಪಡೆಯಬೇಕು; ಸದರಿ ಟೋಲ್ ಪ್ಲಾಜಾದವರು ಸಂಬಂಧಿತ ಗ್ರಾಮ ಪಂಚಾಯಿತಿಗಳಿಗೆ ಯಾವ ಯಾವ ರೀತಿಯ ತೆರಿಗೆಯನ್ನು ಪಾವತಿಸಬೇಕು; ಟೋಲ್ ಪ್ಲಾಜಾದವರಿಗೆ ಕಟ್ಟಡ ತೆರಿಗೆ, ವಾಣಿಜ್ಯ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆಯೇ; | ಶುಲ್ಕ ಸಂಗ್ರಹ ಕೇಂದ್ರಗಳು ರಾಜ್ಯ ಹೆದ್ದಾರಿಯಲ್ಲಿ ನಿರ್ಮಿಸಿರುವುದರಿಂದ ಯಾವುದೇ ಪ್ರಾಧಿಕಾರದ ಅನುಮತಿ ಹಾಗೂ ಸ್ಥಳೀಯ ಗ್ರಾಮ ಪಂಚಾಯ್ತಿಗಳಿಗೆ ತೆರಿಗೆ ಪಾವತಿಸುವ ಅವಶ್ಯಕತೆ ಉದ್ಭವಿಸುವುದಿಲ್ಲ. ವಿದ್ಯುಚ್ಛಕ್ತಿ ಸಂಪರ್ಕಕ್ಕಾಗಿ ಸ್ಥಳೀಯ ಗ್ರಾಮ ಪಂಚಾಯ್ತಿಯಿಂದ ನಿರಪೇಕ್ಷಣಾ ಪತ್ರ ಪಡೆಯಬೇಕಾಗಿರುತ್ತದೆ. ಟೋಲ್ ಗುತ್ತಿಗೆದಾರರು ಕರಾರಿನ ಅನ್ವಯ ನಿಗಮಕ್ಕೆ ಸಲ್ಲಿಸಬೇಕಾಗಿರುವ ವಾರ್ಷಿಕ ಸಂದಾಯ ಮೊತ್ತವು ಎಲ್ಲಾ ರೀತಿಯ ತೆರಿಗೆಗಳಿಂದ ಹೊರತಾಗಿದ್ದು (Net of Taxes) ಗುತ್ತಿಗೆಧಾರರು ಅನ್ವಯಿಸುವ ಎಲ್ಲಾ ತೆರಿಗೆಗಳನ್ನು ತಮ್ಮ ವತಿಯಿಂದಲೇ ಪಾವತಿಸಬೇಕಾಗಿರುತ್ತದೆ. |

<table>
<tr>
<td>ಈ)</td>
<td>ರಾಜ್ಯದಲ್ಲಿರುವ ಟೋಲ್ ಪ್ಲಾಜಾದಿಂದ ಇದುವರೆಗೆ ಸಂಗ್ರಹವಾದ ಸಿ.ಎಸ್.ಆರ್ ನಿಧಿಯ ಮೊತ್ತವೆಷ್ಟು; ಸದರಿ ಸಿ.ಎಸ್.ಆರ್ ನಿಧಿಯನ್ನು ಯಾವ ಯಾವ ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಲಾಗಿದೆ? (ವಿವರ ನೀಡುವುದು)</td>
<td>ಕಂಪನಿ ನಿಯಮಾವಳಿ 2013 ರ ಸೆಕ್ಷನ್ 135 ಉಪವಿಭಾಗ (1) ರಲ್ಲಿ ಉಲ್ಲೇಖಿ ದ್ವನಯ ಪ್ರತಿ ಕಂಪನಿ / ಮಂಡಳಿಯು, ಪ್ರತಿ ಹಣಕಾಸು ವರ್ಷದಲ್ಲಿ ಕಳೆದ 3 ನಿರ್ಣಾಯಕ ವರ್ಷಗಳಲ್ಲಿ<br>
• ಐದು ನೂರು ಕೋಟಿ ಅಥವಾ ಅದಕ್ಕಿಂತ ಹೆಚ್ಚಿನ ನಿವ್ವಳ ಮೌಲ್ಯವನ್ನು ಹೊಂದಿರುವ, ಅಥವಾ<br>
• ರೂಪಾಯಿ ಒಂದು ಸಾವಿರ ಕೋಟಿ ಅಥವ ಅದಕ್ಕಿಂತ ಹೆಚ್ಚಿನ ಮೊತ್ತದ ವಹಿವಾಟು ಅಥವಾ<br>
• ಐದುಕೋಟಿ ರೂಪಾಯಿಗಳ ನಿವ್ವಳ ಲಾಭ ಅಥವಾ ಅದಕ್ಕಿಂತ ಹೆಚ್ಚಿನ ಲಾಭವಿದ್ದಲ್ಲಿ, ಗಳಿಸಿರುವ ಸರಾಸರಿ ಲಾಭಾಂಶದಲ್ಲಿ ಕನಿಷ್ಠ ಶೇ.2 ರಷ್ಟು ಮೊತ್ತವನ್ನು ಸಾಂಸ್ಥಿಕ ಸಾಮಾಜಿಕ ಜವಾಬ್ದಾರಿಗಾಗಿ ಮೀಸಲಿಡಬೇಕು.<br><br>
ಸದರಿ ನಿಬಂಧನೆಗೆ ಅನುಗುಣವಾಗಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ 2020-21ನೇ ಸಾಲಿನ ಆರ್ಥಿಕ ವಹಿವಾಟಿನ ಲೆಕ್ಕಚಾರ ಮಾಡಿದಲ್ಲಿ ಈ ಕೆಳಕಂಡ ಫಲಿತಾಂಶ ಕಂಡುಬರುತ್ತಿದೆ.<br>
<table>
<tr><td>1</td><td>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ನಿವ್ವಳ ಮೌಲ್ಯ- ರೂ.229.22ಕೋಟಿ</td><td>ಸೆಕ್ಷನ್ 135 ಉಪವಿಭಾಗ (1) ರಲ್ಲಿ ನಿರ್ದಿಷ್ಟ ಪಡಿಸಲಾದ ನೆಟ್‌ವರ್ತ್-ರೂ.500.00 ಕೋಟಿ.</td></tr>
<tr><td>2</td><td>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವಹಿವಾಟು- ರೂ.91.38 ಕೋಟಿ</td><td>ಸೆಕ್ಷನ್ 135 ಉಪವಿಭಾಗ (1) ರಲ್ಲಿ ನಿರ್ದಿಷ್ಟ ಪಡಿಸಲಾದ ವಹಿವಾಟು- ರೂ.1,000 ಕೋಟಿ.</td></tr>
<tr><td>3</td><td>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಕಳೆದ 3 ವರ್ಷಗಳ ಸರಾಸರಿ ನಿವ್ವಳ ಲಾಭ/ನಷ್ಟ:<br>2018-19 ನಿವ್ವಳ ಲಾಭ-ರೂ.2.29 ಕೋಟಿ.<br>2019-20 ನಿವ್ವಳ ನಷ್ಟ -ರೂ.7.24 ಕೋಟಿ<br>2020-21 ರ ನಿವ್ವಳ ನಷ್ಟ - ರೂ 12.87 ಕೋಟಿ<br>ಸರಾಸರಿ ನಿವ್ವಳ ನಷ್ಟ ರೂ.5.94</td><td>ಸೆಕ್ಷನ್ 135 ಉಪವಿಭಾಗ (1) ರಲ್ಲಿ ನಿರ್ದಿಷ್ಟ ಪಡಿಸಲಾದ ಸರಾಸರಿ ನಿವ್ವಳ ಲಾಭ ರೂ.5.00 ಕೋಟಿ.</td></tr>
</table>
<br>
ಮೇಲಿನ ಲೆಕ್ಕಾಚಾರ ದಿಂದ ಹಾಗೂ ಹಿಂದಿನ ವರ್ಷಗಳಲ್ಲಿ ಸಂಚಿತ (Cumulative loss) ನಷ್ಟದಲ್ಲಿರುವುದರಿಂದ ಕಾರ್ಪೊರೇಟ್ ಸಾಮಾಜಿಕ ಹೊಣೆಗಾರಿಕೆಯ ಅನ್ವಯಿಕತೆಯ ಯಾವುದೇ ಮಾನದಂಡಗಳನ್ನು ಪೂರೈಸಿಲ್ಲದಿರುವುದರಿಂದ ನಿಗಮವು ಸಿ.ಎಸ್.ಆರ್ ನಿಧಿಯನ್ನು ಕಾಯ್ದಿರಿಸಿರುವುದಿಲ್ಲ. ಆದುದರಿಂದ ಟೋಲ್ ಆದಾಯದಲ್ಲಿ ಸಿ.ಎಸ್.ಆರ್ ನಿಧಿಯನ್ನು ಕಾಯ್ದಿರಿಸಿರುವ ಪ್ರಮೇಯ ಉದ್ಭವಿಸುವುದಿಲ್ಲ.</td>
</tr>
</table>

ಸಂಖ್ಯೆ: ಲೋಇ E-120 ಇಎಪಿ 2022

(ಸಿ.ಸಿ. ಪಾಟೀಲ್)
**ಲೋಕೋಪಯೋಗಿ ಸಚಿವರು**